# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 09(85) |
| ಸದಸ್ಯರ ಹೆಸರು | : | ಶ್ರೀ ಗೋವಿಂದ ರಾಜು (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 15.02.2022 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ನಗರಾಭಿವೃದ್ಧಿ ಪ್ರಾಧಿಕಾರ ಯಾವಾಗ ಪ್ರಾರಂಭವಾಯಿತು. ಇಲ್ಲಿಯವರೆಗೂ ಈ ಪ್ರಾಧಿಕಾರದಲ್ಲಿ ನಡೆಯುತ್ತಿರುವ ಚಟುವಟಿಕೆಗಳೇನು: | ಸರ್ಕಾರದ ಅಧಿಸೂಚನೆ ಸಂಖ್ಯೆ:ವನಇ 181 ಟಿಟಿಪಿ 88, ದಿನಾಂಕ:15.04.1988 ರ ಆದೇಶದಂತೆ ಕೋಲಾರ ನಗರಾಭಿವೃದ್ಧಿ ಪ್ರಾಧಿಕಾರವು ದಿನಾಂಕ:17.06.1988 ರಿಂದ ಕಾರ್ಯಾಚರಣೆಗೆ ಬಂದಿರುತ್ತದೆ. ಕೋಲಾರ ನಗರಾಭಿವೃದ್ಧಿ ಪ್ರಾಧಿಕಾರದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ 33 ಗ್ರಾಮಗಳಿದ್ದು, 69.95 ಚ.ಕಿ.ಮೀ. ವ್ಯಾಪ್ತಿ ಇರುತ್ತದೆ.<br><br>1. ಪ್ರಾಧಿಕಾರದಿಂದ 1995-1996 ರಲ್ಲಿ ಟಮಕ ವಸತಿ ಬಡಾವಣೆಯನ್ನು ನಿರ್ಮಿಸಿದ್ದು, ಈ ಬಡಾವಣೆಯಲ್ಲಿ 1426 ನಿವೇಶನಗಳನ್ನು ನಿರ್ಮಾಣ ಮಾಡಲಾಗಿದೆ.<br>2. ಕೋಲಾರ ನಗರದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಸರ್ಕಾರದಿಂದ ದಿನಾಂಕ:09.08.2010 ರಂದು ಅಂತಿಮ (ಪ-1) ಮಹಾಯೋಜನೆ ಅನುಮೋದನೆಯಾಗಿದ್ದು, 2021 ಕ್ಕೆ ಸದರಿ ಮಹಾಯೋಜನೆ ಅಂತಿಮಗೊಳ್ಳುವುದರಿಂದ ಕೇಂದ್ರ ಸರ್ಕಾರದ ಅಮೃತ್ ಯೋಜನೆಯ ಅನುದಾನದಡಿಯಲ್ಲಿ ಮಹಾಯೋಜನೆಯನ್ನು ಪರಿಷ್ಕರಿಸುವ ಕಾರ್ಯವು ಪ್ರಗತಿಯಲ್ಲಿರುತ್ತದೆ. Transerve Technologies Pvt.Ltd Panaji ಇವರಿಗೆ ಮಹಾಯೋಜನೆ ಪರಿಷ್ಕರಿಸುವ ಕಾರ್ಯಕ್ಕೆ ಕಾರ್ಯಾದೇಶವನ್ನು ದಿನಾಂಕ:14.01.2020 ರಂದು ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ |

| | | |
|---|---|---|
| | | ರವರು ನೀಡಿರುತ್ತಾರೆ.<br>3. ವಸತಿ ಬಡಾವಣೆಗಳನ್ನು ನಿರ್ಮಿಸಿ ಸಾರ್ವಜನಿಕರಿಗೆ ನಿವೇಶನಗಳನ್ನು ಹಂಚಿಕೆ ಮಾಡುವುದು.<br>4. ಕೆರೆ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳಲಾಗುವುದು.<br>5. ಪ್ರಾಧಿಕಾರದಲ್ಲಿ ಲಭ್ಯವಿರುವ ನಾಗರಿಕ ಸೌಲಭ್ಯ ನಿವೇಶನಗಳನ್ನು ಹಂಚಿಕೆ ಮಾಡುವುದು.<br>6. ಪ್ರಾಧಿಕಾರದ ವ್ಯಾಪ್ತಿಯಲ್ಲಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ಮತ್ತು ನಗರದ ಅಭಿವೃದ್ಧಿಗೆ ಪೂರಕವಾಗಿ ಅಗತ್ಯ ಕಾಮಗಾರಿಗಳನ್ನು ಕೈಗೊಳ್ಳಲಾಗುವುದು. |
| ಆ) | ಪ್ರಾಧಿಕಾರದ ವತಿಯಿಂದ ಕಳೆದ 5 ವರ್ಷಗಳಿಂದ ನೀಡಿದ ಕಾರ್ಯ ಕ್ರಮಗಳೇನು: | 1. ಟಮಕ ವಸತಿ ಬಡಾವಣೆಯಲ್ಲಿರುವ ಆಟದ ಮೈದಾನ ಮತ್ತು ಉದ್ಯಾನವನವನ್ನು ಅಭಿವೃದ್ಧಿ ಪಡಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>2. ಟಮಕ ವಸತಿ ಬಡಾವಣೆಯ ಗದ್ದೆ ಕಣ್ಣೂರು ರಸ್ತೆಯ ಬಲಭಾಗದ 60 ಅಡಿ ಅಗಲದ 1000 ಮೀ. ಉದ್ದದ ರಸ್ತೆ ಅಭಿವೃದ್ಧಿ ಕಾಮಗಾರಿ ಪೂರ್ಣಗೊಳಿಸಲಾಗಿದೆ.<br>3. ಕೋಲಾರ ನಗರಾಭಿವೃದ್ಧಿ ಪ್ರಾಧಿಕಾರದ ಟಮಕ ವಸತಿ ಬಡಾವಣೆಗೆ ವಿದ್ಯುತ್ ಸಂಪರ್ಕ ಕಾಮಗಾರಿಯನ್ನು ಪೂರ್ಣಗೊಳಿಸಲಾಗಿದೆ.<br>4. ಕೋಲಾರ ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಕೋಲಾರ ನಗರದ ರಾಜ್ಯ ಹೆದ್ದಾರಿ ಮತ್ತ ಜಿಲ್ಲಾ ಮುಖ್ಯರಸ್ತೆಗಳಲ್ಲಿ ಬಸ್ಸು ತಂಗುದಾಣ ನಿರ್ಮಾಣ, ಕಾಮಗಾರಿ ಕೈಗೊಳ್ಳಲಾಗುತ್ತಿದೆ.<br>5. ಟಮಕ ವಸತಿ ಬಡಾವಣೆಯ ನಿವಾಸಿಗಳಿಗೆ ಟ್ಯಾಂಕರ್ ಮೂಲಕ ನೀರು ಸರಬರಾಜು ಮಾಡುವುದು (ಶಾಶ್ವತ ನೀರಿನ ಸಂಪರ್ಕ ಕಲ್ಪಿಸುವವರೆಗೆ) |
| ಇ) | ಇಲ್ಲಿ ವಸೂಲಾದ ಕರಗಳನ್ನು ಯಾವ ಯಾವ ಕಾರ್ಯಕ್ರಮಗಳಿಗೆ ಬಳಸಲಾಗುತ್ತಿದೆ (ವಿವರವಾದ | 1. ಸಾಮಾನ್ಯ ಖಾತೆಯಿಂದ ಸಿಬ್ಬಂದಿ ವೇತನ, ಸಾದಿಲ್ವಾರು ಇತರೆ ವೆಚ್ಚಗಳನ್ನು ಭರಿಸಲಾಗುತ್ತದೆ. |

| | | |
|---|---|---|
| | ಮಾಹಿತಿ ನೀಡುವುದು). | 2. ಕೆರೆ ಅಭಿವೃದ್ಧಿ ಶುಲ್ಕವನ್ನು ಪ್ರಾಧಿಕಾರದ ವ್ಯಾಪ್ತಿಯಲ್ಲಿನ ಕೆರೆಗಳನ್ನು ಅಭಿವೃದ್ಧಿ ಪಡಿಸಲು ಕೆರೆ ಸರಂಕ್ಷಣಾ ಪ್ರಾಧಿಕಾರ ಅನುಮತಿ ಪಡೆದು ಕ್ರಮವಹಿಸಲಾಗುವುದು.<br>3. ಉದ್ಯಾನವನ ರಿಯಾಯಿತಿ ಶುಲ್ಕವನ್ನು ಉದ್ಯಾನವನ ಅಭಿವೃದ್ಧಿ ಪಡಿಸಲು ಭೂ ಸ್ವಾಧೀನಕ್ಕೆ ಉಪಯೋಗಿಸಲಾಗುವುದು.<br>4. ಕೊಳಚೆ ಸೆಸ್ಸು ಮೊತ್ತವನ್ನು - ಕೊಳಚೆ ನಿರ್ಮೂಲನಾ ಮಂಡಳಿಗೆ ಪಾವತಿಸಲಾಗುತ್ತಿದೆ.<br>5. ನಿವೇಶನ ಹಾಗೂ ನಾಗರಿಕ ಸೌಲಭ್ಯ ಹಂಚಿಕೆಯಿಂದ ಲಭ್ಯವಾಗುವ ನಿವೇಶನಗಳ ಮೊತ್ತವನ್ನು ಸಿವಿಲ್ ಕಾಮಗಾರಿಗಳಿಗೆ ಹಾಗೂ ವಸತಿ ಯೋಜನೆಯ ಭೂಸ್ವಾಧೀನ ಪ್ರಕ್ರಿಯೆಗೆ ಉಪಯೋಗಿಸಲಾಗುವುದು. |
| ಈ | ವಿವಿಧ ಶೀರ್ಷಿಕೆಯಡಿ ಉಳಿದಿರುವ ಮೊತ್ತವೆಷ್ಟು. | 1.ಸಾಮಾನ್ಯ ಖಾತೆ: **26809518/-**<br>2.ಕೆರೆ ಅಭಿವೃದ್ಧಿ ಶುಲ್ಕ: **14360890/-**<br>3.ಉದ್ಯಾನವನ ರಿಯಾಯಿತಿ ಶುಲ್ಕ: **7257326/-**<br>4.ಕೊಳಚೆ ಸೆಸ್ಸು: **2589760/-**<br>5.ಸಿ.ಎ.ನಿವೇಶನ: **37641590/-**<br>ಒಟ್ಟು: **8,86,59,084/-** |
| ಉ | ಪ್ರಾಧಿಕಾರದಲ್ಲಿ ಪ್ರಸ್ತುತ ಸಿಬ್ಬಂದಿಗಳ ಕೊರತೆ ಇದ್ದು, ಈ ಕೊರತೆಯನ್ನು ನೀಗಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? | ಪ್ರಾಧಿಕಾರಕ್ಕೆ ತಾತ್ಕಾಲಿಕವಾಗಿ ಮಂಜೂರಾಗಿರುವ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಲಾಗುತ್ತಿದೆ. |

**ಸಂಖ್ಯೆ: ನಅಇ 04 ಎಲ್‌ಸಿಕ್ಯೂ 2022(ಇ-ಕಡತ)**

(ಬಿ.ಎ. ಬಸವರಾಜು)
ನಗರಾಭಿವೃದ್ಧಿ ಸಚಿವರು